ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 10 ನೇ ಮಾರ್ಚ್, 2020

ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆಯಿಂದ ರೈತರಿಗೆ ಸಿಗುತ್ತಿರುವ ಸೌಲಭ್ಯ ಕುರಿತು

ಶ್ರೀಮತಿ ಎಸ್. ವೀಣಾ ಅಚ್ಚಯ್ಯ(ವಿಧಾನಸಭೆಯಿಂದ ಚುನಾಯಿತರಾದವರು):-

546 (604) ಮಾನ್ಯ ಪೌರಾಡಳಿತ ಹಾಗೂ ತೋಟಗಾರಿಕೆ ಮತ್ತು ರೇಷ್ಮೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ :-

(ಅ) ರಾಜ್ಯದ ರೈತರಿಗೆ ತೋಟಗಾರಿಕೆ ಮತ್ತು ರೇಷ್ಮೆ ಇಲಾಖೆಯಿಂದ ಸಿಗುತ್ತಿರುವ ಸೌಲಭ್ಯಗಳು ಯಾವುವು ; (ಸಾಲ, ಸಹಾಯಧನ ಹಾಗೂ ಪ್ರೋತ್ಸಾಹ ಧನದ ಸಂಪೂರ್ಣ ವಿವರ ನೀಡುವುದು)

(ಆ) ತೋಟಗಾರಿಕೆ ಹಾಗೂ ರೇಷ್ಮೆ ಇಲಾಖೆಯಿಂದ ಕೊಡಗು ಜಿಲ್ಲೆಯ ರೈತರಿಗೆ 2017-18, 2018-19 ಹಾಗೂ 2019-20 ನೇ ಸಾಲಿನಲ್ಲಿ ನೀಡಿರುವ ಸೌಲಭ್ಯಗಳೇನು ; ವಿತರಿಸಿರುವ ಸಾಲ, ಸಹಾಯಧನ ಹಾಗೂ ಪ್ರೋತ್ಸಾಹ ಧನದ ವಿವರ ನೀಡುವುದು ;

(ಇ) 2018 ಹಾಗೂ 2019 ನೇ ವರ್ಷದಲ್ಲಿ ಸಂಭವಿಸಿದ ಭೂಕುಸಿತ ಹಾಗೂ ಪ್ರವಾಹದಿಂದ ಹಾಳಾದ ತೋಟಗಾರಿಕಾ ಕ್ಷೇತ್ರಗಳ ಅಭಿವೃದ್ಧಿಗೆ ಸರ್ಕಾರ ಕೈಗೊಂಡಿರುವ ಕ್ರಮಗಳೇನು ; ನೀಡಿರುವ ಅನುದಾನವೆಷ್ಟು ?